ಟಿ. ಶಂಭುಲಿಂಗಪ್ಪ*

# ಪ್ರಾಗೈತಿಹಾಸಿಕ ಸ್ಥಳ–ಗವಿ ಮಠ

ರಾಯಚೂರು ಜಿಲ್ಲೆಯ ಈಗಿನ ಕೊಪ್ಪಳನಗರ ಪ್ರಮುಖ ವ್ಯಾಪಾರ ಕೇಂದ್ರ. ಅದನ್ನು ಹಿಂದೆ "ವಿದಿತ ಮಹಾಕೊಪಣನಗರ"ವೆಂತಲೂ "ತಿರುಳ್ಗನ್ನಡ ನಾಡು" ಎಂತಲೂ ಕವಿರಾಜ ಮಾರ್ಗ ಕೃತಿಯು ಉಲ್ಲೇಖಿಸಿದೆ. ಪ್ರಸ್ತುತ ಅದು ಹುಬ್ಬಳ್ಳಿ–ಹೊಸಪೇಟೆ ರೈಲ್ವೇ ಮಾರ್ಗ ದಲ್ಲಿದೆ. ಒಂದು ಪ್ರಸಿದ್ಧ ಐತಿಹಾಸಿಕ ಸ್ಥಳ.

ಕೊಪ್ಪಳನಗರದ ಪಶ್ಚಿಮ ದಿಕ್ಕಿನತ್ತ ಎತ್ತರವಾದ ಗುಡ್ಡಗಳ ಶ್ರೇಣಿ ಹಬ್ಬಿದೆ. ಅದರಲ್ಲಿ "ಪಾಲ್ಕಿಗುಂಡು" ಅಥವಾ 'ಪಲ್ಲಕ್ಕಿ ಗುಂಡು' ಎಂಬುದು ಅಶೋಕನ ಶಾಸನದ ಸ್ಥಳ. ಇದರ ಪೂರ್ವ ದಿಸೆಯಲ್ಲಿ ಗವಿ ಮಠವೆಂಬುದು ಪ್ರಸಿದ್ಧ ವೀರಶೈವ ಮಠ. ಗವಿ ಮಠದ ಪಶ್ಚಿಮ ದಿಕ್ಕಿನತ್ತ ಒಂದು ಗವಿಯಿದೆ. ಅದರ ಕೆಳಬದಿಯಲ್ಲಿ ಕೆರೆಯೂ, ಕೆರೆಯ ನೈರುತ್ಯ ದಿಸೆಯ ಮೂಲೆಯಲ್ಲಿರುವ ಗವಿಯ ಮುಂಭಾಗದಲ್ಲಿ ಕೆಲ ಜೈನ ಸಮಾಧಿಗಳಿವೆ. ಕೆಲವು ನಿಷದಿಗಲ್ಲು ಮತ್ತು ವೀರಗಲ್ಲು ಗಳಿವೆ. ಈ ಮಠದ ಉತ್ತರ ದಿಕ್ಕಿನಲ್ಲಿ ಬಂಡೆಗಲ್ಲಿನ ಮೇಲೆ ಜೈನ ತೀರ್ಥಂಕರರ ಕೆಲವು ಚಿತ್ರಗಳನ್ನು ಬಿಡಿಸಲಾಗಿದೆ. ಇದೇ ದಿಕ್ಕಿನಲ್ಲಿ ಸುಮಾರು ಒಂದು ಫರ್ಲಾಂಗ್ ಮುಂದಕ್ಕೆ ಹೋದರೆ ಗವಿ ಮಠದ ಹಿಂಭಾಗದ ಗುಡ್ಡ ಪ್ರದೇಶ. ಅಲ್ಲೊಂದು ದೊಡ್ಡ ಬಂಡೆಯ ಮೇಲೆ ಮತ್ತೊಂದು ಬಂಡೆ ಕೊಡೆಯಾಕಾರ ದಂತಿದೆ. ಅದೊಂದು ವಿಶ್ರಾಂತಿಧಾಮ. ಇದರ ಕೆಳಗಡೆಯ ಬಂಡೆಗಲ್ಲಿನ ಮೇಲೆ ಅಶೋಕನ ಮತ್ತೊಂದು ಶಾಸನವಿದೆ. ಅದರ ಬುಡದಲ್ಲಿ ಒಂದು ಗವಿ. ಆ ಗವಿಯ ಎದುರು ಸುಮಾರು ½ಕಿ.ಮಿ. ದೂರದಲ್ಲಿ ಮತ್ತೆರಡು ಗವಿಗಳು. ಆ ಎರಡು ಗವಿಗಳಲ್ಲಿ ವರ್ಣ ಚಿತ್ರಗಳಿವೆ. ಉತ್ತರ ದಿಕ್ಕಿಗೆ ಅಭಿಮುಖವಾಗಿರುವ ಗವಿಯ ಮುಂಭಾಗದ್ದೇ ಗವಿ ಸಿದ್ದೇಶ್ವರ ಮಠ. ಹೀಗೆ ಗವಿ ಮಠದ ಗುಡ್ಡ ಪ್ರದೇಶದಲ್ಲಿ ಒಟ್ಟು ನಾಲ್ಕು ಗವಿಗಳಿವೆ.

ಗವಿ ಸಿದ್ದೇಶ್ವರ ಮಠವು ಒಂದು ಪ್ರಾಚೀನ ಮಠವೆನಿಸಿದ್ದರೂ ಮೂಲತಃ ಅದೊಂದು ಗುಹಾಂತರ ದೇವಾಲಯ ! ಸಿದ್ದೇಶ್ವರ ದೇವಾಲಯ !! ಇತ್ತೀಚೆಗೆ. ನಾನು ಪರಿಶೀಲಿಸಿದಂತೆ ಅದೊಂದು ಹೊಯ್ಸಳ ಕಾಲದ ದೇವಾಲಯವಾಗಿರಬೇಕು. ಕಾರಣ ಹೊಯ್ಸಳ ದೇವಾಲಯದ ಅನೇಕ ಲಕ್ಷಣಗಳು ಈ ಮಠದಲ್ಲಿ ಕಾಣಬರುತ್ತವೆ. ಮುಖ್ಯವಾಗಿ ಈ ಕಟ್ಟಡದ ರಚನೆಯಲ್ಲಿ ಬಳಸಿರುವ ಕಂಭಗಳೇ ಇದಕ್ಕೆ ಸಾಕ್ಷಿ.

ಈಗಾಗಲೇ ದೊರೆತಿರುವ ಗವಿ ಮಠದ ಅಶೋಕನ ಶಾಸನವಿರುವ ಸ್ಥಳದ ಸಮೀಪದಲ್ಲಿಯೇ ಪೂರ್ವಕ್ಕೆ ಅಭಿಮುಖವಾಗಿ ಮತ್ತೊಂದು ಕಿರು ಬೆಟ್ಟ ವಿದ್ದು, ಆ ಬೆಟ್ಟದ ಎರಡೂ ಗುಹೆಗಳಲ್ಲಿ ಶಿಲಾಯುಗದ ವರ್ಣ ಚಿತ್ರಗಳು ಕಾಣಬರುತ್ತವೆ. ಒಂದು ಗುಹೆಯ ಮೇಲ್ಭಾಗದಲ್ಲಿ ಹಳದಿ–ಮಿಶ್ರಿತ ಮಸುಕು ಬಿಳಿಯ ದ್ವಿವರ್ಣಗಳಲ್ಲಿ ಗಂಡು–ಹೆಣ್ಣಿನ ಚಿತ್ರವನ್ನು ಬಿಡಿಸ ಲಾಗಿದೆ. ಅನತಿ ದೂರದಲ್ಲಿಯೇ ಇರುವ ಮತ್ತೊಂದು ಗುಹೆಯಲ್ಲಿ ಕೆಂಪು ಬಣ್ಣದ ಸೂರ್ಯ, ಮನುಷ್ಯ,

* ರೀಡರ್ ; ಎಸ್.ಜೆ.ಎಂ. ಕಾಲೇಜು, ಚಿತ್ರದುರ್ಗ.

ಪ್ರಾಣಿ (?)–ನೃತ್ಯ ಸಮೂಹ ಇವುಗಳ ಚಿತ್ರಗಳನ್ನು ಬರೆಯಲಾಗಿದೆ. ಈ ಎರಡೂ ಗುಹೆಯ ವರ್ಣ ಚಿತ್ರಗಳು ಗವಿಯ ಒಳ ಮೇಲ್ಭಾಗದ ಕಲ್ಲಾಸರೆಯಲ್ಲಿ ಬಿಡಿಸಲಾಗಿದ್ದು, ಬೆಳಕಿನ ಸಹಾಯದಿಂದ ಸೂಕ್ಷ್ಮ ವಾಗಿ, ನಿಧಾನವಾಗಿ ಪರಿಶೀಲಿಸಿದರೆ ಮಾತ್ರ ಕಾಣುವವು. ಪ್ರಾಯಶಃ ಚಿತ್ರಗಾರನು ಈ ಚಿತ್ರಗಳನ್ನು ಅಂಗಾತವಾಗಿ ಮಲಗಿಯೇ ಚಿತ್ರಿಸಿರಲು ಸಾಧ್ಯ. ಈ ಚಿತ್ರಗಳು ಇದೇ ತಾಲ್ಲೂಕಿನ ಹಿರೆಬೆನಕಲ್ಲಿನ ಆರನೆಯ ಗವಿ ಹಾಗು ಕುರು ಗೋಡಿನ ನಾಲ್ಕನೆಯ ಗವಿಯ ಚಿತ್ರಗಳ ಸ್ಮರಣೆಯನ್ನು ತರುತ್ತಿವೆ.

ಈ ಚಿತ್ರಗಳ ಕಾಲವನ್ನು ತಿಳಿಯುವುದು ಕಷ್ಟವೇ "ಬಹಳಷ್ಟು ಚಿತ್ರಗಳ ಕಾಲ ಮಾನವನ್ನು ನಿರ್ಧರಿಸುವುದು ಈ ಚಿತ್ರಗಳ ಅಧ್ಯಯನಕ್ಕೆ ಸಂಬಂಧಿಸಿದ ಕ್ಲಿಷ್ಟ ಸಮಸ್ಯೆಗಳಲ್ಲಿ ಒಂದು" ಎಂದಿರುವ ಡಾ. ಅ. ಸುಂದರರವರ ಮಾತನ್ನು ಇಲ್ಲಿ ಸ್ಮರಿಸ ಬೇಕಾಗಿದೆ. ಆದರೂ ಕೆಲವು ಚಿತ್ರಗಳ ವೈಲಕ್ಷಣ್ಯಗಳ ಅಧ್ಯಯನದಿಂದ ಇವುಗಳು ಶಿಲಾಯುಗದ ಚಿತ್ರಗಳಾಗಿರ ಬೇಕು. ಇವುಗಳ ಬಗ್ಗೆ ಇನ್ನೂ ಸಂಶೋಧನೆ ನಡೆಯ ಬೇಕಾಗಿದೆ. ೬-೧೧-೧೯೮೮ರ ಪ್ರಜಾವಾಣಿಯಲ್ಲಿ ಇದರ ಬಗ್ಗೆ ಸುದ್ದಿ ಪ್ರಕಟವಾಗಿತ್ತು.

ರಾಯಚೂರು ಜಿಲ್ಲೆಯ ಕೊಪ್ಪಳದ ಗವಿ ಮಠದ ಗುಹಾ ವರ್ಣ ಚಿತ್ರಗಳೊಂದಿಗೆ ಗಂಗಾವತಿ ತಾಲ್ಲೂಕಿನ ಬಳೆಬಾವಿ, ಮಲ್ಲಾಪುರ, ಆನೆಗೂಂದಿ, ತಿಮ್ಮಲಾಪುರ, ನಾರಾಯಣಪುರ, ಬಂದಿಹಲ್ಲಾಪುರ ಮಾನ್ವಿತಾಲ್ಲೂಕಿನ ಮಾನ್ವಿ ಬೈಲ್ ಮರ್ಚೆಡ್ ಈ ಮೊದಲಾದ ಕಡೆಯಲ್ಲಿನ ಗವಿಗಳಲ್ಲಿ ವರ್ಣ ಚಿತ್ರಗಳು ಕಂಡು ಬಂದಿವೆ. ಇಲ್ಲಿನ ವರ್ಣ ಚಿತ್ರಗಳು ಸಾಮಾನ್ಯ ವಾಗಿ ಗುಹೆ ಒಳಗಿನ ಬಂಡೆಗಳ ಮೇಲೆ ಇದ್ದು ಕಿರಿದಾದ ಗುಹೆಯ ದ್ವಾರವನ್ನು ತೆವಳಿಕೊಂಡು ಒಳ ಹೋಗಬೇಕು. ಇಲ್ಲಿನ ಗವಿಗಳಲ್ಲಿ ಮನುಷ್ಯರ, ಪ್ರಾಣಿಗಳ, ಸಾಮೂಹಿಕ ನೃತ್ಯ, ಮನುಷ್ಯರ ಜೋಡಿ, ಪ್ರಾಣಿಗಳ ಸಾಲು-ಈ ಚಿತ್ರಗಳನ್ನು ಕಾಣಬಹುದಾಗಿದೆ.

ಕೊಪ್ಪಳದ ಸುತ್ತು-ಮುತ್ತಲಿನ ಅಗೋಳಿ, ಬೆಣಕಲ್ ಗುಡ್ಡ, ಎಮ್ಮಿಗುಡ್ಡ, ಹಿರೆಬೆನಕಲ್–ಸ್ಥಳ ಗಳಲ್ಲಿ ಶಿಲಾ ಸಮಾಧಿಗಳೊಂದಿಗೆ ಇಂಥ ಗುಹಾ ಚಿತ್ರ ಗಳನ್ನು ಕಾಣುತ್ತೇವೆ. ಕೊಪ್ಪಳ ಪ್ರದೇಶವು ಬಹು ಪುರಾತ ಕಾಲದಿಂದಲೂ ಮಾನವನ ನಿವಾಸ ಸ್ಥಾನ ವಾಗಿತ್ತು ಎನ್ನಲು ಇಂಥ ಗುಹಾ ಚಿತ್ರಗಳೂ, ರೇಖಾ ಚಿತ್ರಗಳು ಸಕಾರಣವಾಗಿವೆ. ಪ್ರಾಗೈತಿಹಾಸಿಕ ಚಿತ್ರ ಗಳಲ್ಲಿ ಒಂದಾದ ಗವಿಯೊಳಗಿನ ವರ್ಣರಂಜಿತ ಚಿತ್ರಗಳು ಉತ್ತರ ಕರ್ನಾಟಕದಲ್ಲಿ ಈ ವರಿವಿಗೂ ೨೭ ಸ್ಥಳಗಳಲ್ಲಿ ಒಟ್ಟು ೧೨೩ ವರ್ಣಚಿತ್ರಗಳು ಲಭ್ಯವಾಗಿವೆ. ಇವುಗಳ ಜೊತೆಗೆ ಗವಿ ಸಿದ್ಧೇಶ್ವರ ಮಠದ ಗುಹಾ ಚಿತ್ರಗಳನ್ನು ಹೊಸದಾಗಿ ಸೇರಿಸಬೇಕಾಗಿದೆ. ಇಲ್ಲಿಯವರಿವಿಗೂ ಕೊಪ್ಪಳ, ಪಿಕ್ಕಿಹಾಳ, ಹಿರೆಬೆನಕಲ್, ಆನೆಗೊಂದಿ, ಹಂಪೆ, ಮಾನ್ವಿ, ಗಂಗಾವತಿ ತಾ|| ಗಳಲ್ಲಿ ಇಂಥ ಚಿತ್ರ ಗಳು ಲಭ್ಯವಾಗಿದ್ದು ಒಟ್ಟು ಕರ್ನಾಟಕದ ರಾಯಚೂರು ಜಿಲ್ಲೆ ಗುಹಾ ಚಿತ್ರಗಳ ಆಗರವಾಗಿದೆ, ಚಿತ್ರಕಲೆಯ ಕೇಂದ್ರಸ್ಥಾನ ಎರಡನೆಯ ಸ್ಥಾನ ಚಿತ್ರದುರ್ಗ ಜಿಲ್ಲೆಗೆ ಸಲ್ಲುತ್ತದೆ.

ಶಿಲಾಯುಗದ ನಿವೇಶನಗಳನ್ನು ಗುರುತಿಸಿ, ಪ್ರಾಚೀನ ಚಿತ್ರಗಳನ್ನು ಹುಡುಕುವ ಕೆಲಸ ನಮ್ಮಲ್ಲಿ ಇನ್ನು ಸಕ್ರಮವಾಗಿ ನಡೆದಿಲ್ಲವೆಂದೇ ಹೇಳಬೇಕು. ಅವುಗಳ ಬಗ್ಗೆ ಹೆಚ್ಚು ಸಂಖ್ಯೆಯ ಕೃತಿಗಳೂ ಅಲಭ್ಯ ; ಬಿಡಿ ಬಿಡಿ ಲೇಖನಗಳೇ ಹೆಚ್ಚು. ಈ ನಿಟ್ಟಿನಲ್ಲಿ ಹಿರೆ ಬೆನಕಲ್, ಬಾದಾಮಿ, ಬೈಲ್ ಮರ್ಚಡ್, ಚಿತ್ರದುರ್ಗ ಚಂದ್ರವಳ್ಳಿ ಮತ್ತು ಕೊಟ್ಟೂರು ತಾಲೂಕಿನ ಐಯ್ಯಪ ಹಳ್ಳಿ, ಕುಂದಾಪುರ ತಾಲ್ಲೂಕಿನ ಗವಳಿ ಮುಂತಾದ ಕಡೆಯ ಚಿತ್ರಗಳನ್ನು ವಿದ್ವಾಂಸರು ಗುರುತಿಸಿದ್ದರೂ ವಿವರವಾಗಿ ಅಧ್ಯಯನವಾಗಿಲ್ಲ.